# ವ್ಯತ್ಯಾಸಗಳನ್ನು ಒಪ್ಪಿಕೊಳ್ಳಲು ಕಲಿಯುವುದು

ಶೆಫಾಲಿ ತ್ರಿಪಾಠಿ ಮೆಹ್ತಾ

ಸುಮಾರು ಮೂರು ದಶಕಗಳ ಹಿಂದೆ, ಮೊದಲಬಾರಿಗೆ ವಿಕಲಚೇತನರ ಸಬಲೀಕರಣಕ್ಕಾಗಿ ಶ್ರಮಿಸುತ್ತಿರುವ ಸ್ವಯಂಸೇವಾ ಸಂಸ್ಥೆಯಾದ ಆರುಷಿಯಿಂದ ತರಬೇತುಗೊಂಡು ಮುಖ್ಯವಾಹಿನಿಯ ಶಾಲೆಗೆ ಪ್ರವೇಶ ಪಡೆದ ಇಬ್ಬರು ದೃಷ್ಟಿ ವಿಕಲಚೇತನ ಮಕ್ಕಳು, ಬೆಳಗಿನ ಅಸೆಂಬ್ಲಿ ಮತ್ತು ಅನಂತರದ ಆಟದ ಅವಧಿಯಲ್ಲಿ ತರಗತಿಯಲ್ಲಿಯೇ ಇದ್ದರು. ಈ ಅವಧಿಯಲ್ಲಿ ನೀವು ತರಗತಿಯಲ್ಲಿ ಏನು ಮಾಡುವಿರಿ ಎಂದು ಅವರನ್ನು ಕೇಳಲಾಯಿತು.

ನಿಸ್ಸಂದೇಹವಾಗಿ ಇದು ಶಾಲೆ/ಶಿಕ್ಷಣದ ಪ್ರವೇಶಕ್ಕೆ ಒತ್ತು ನೀಡುವ ಸಮನ್ವಯ ಶಿಕ್ಷಣದ ವ್ಯಾಖ್ಯಾನಕ್ಕೆ ಮೀರಿದ ದೊಡ್ಡ ಅಡಚಣೆಯಾಗಿದೆ, ಇಲ್ಲಿ ನಾವು ದೈಹಿಕ ಮತ್ತು ಮಾನಸಿಕ ಅಸಾಮರ್ಥ್ಯವನ್ನು ಹೇಗೆ ಗ್ರಹಿಸುತ್ತೇವೆ ಎಂಬುದರ ಹಿಂದೆ ಸಂಪೂರ್ಣವಾಗಿ ರೂಢಿಗತವಾಗಿ ಬಂದ (ಸಮಾಜಶಾಸ್ತ್ರೀಯ) ಮೂಲಭೂತ ಅಂಶಗಳಿವೆ. ಜನಪ್ರಿಯ ಚಲನಚಿತ್ರಗಳು ಮತ್ತು ಸಾಹಿತ್ಯಪ್ರಕಾರಗಳಲ್ಲಿ ತ್ಯಾಗದ ಕಲ್ಪನೆ ರಮ್ಯವೆನಿಸುತ್ತದೆ-ವಿಕಲಚೇತನ ನಾಯಕ ಉದ್ದೇಶಪೂರ್ವಕವಾಗಿಯೇ ತಾನು ಇಷ್ಟಪಡುವ ಹುಡುಗಿಯ ದೃಷ್ಟಿಯಲ್ಲಿ ಕೆಟ್ಟವನೆನಿಸಿಕೊಳ್ಳಲು ಮತ್ತು ಯಾವುದೇ ನ್ಯೂನತೆ ಇಲ್ಲದ ಇನ್ನೊಬ್ಬ ನಾಯಕನ ಹಾದಿಯನ್ನು ಸುಗಮ ಮಾಡಿಕೊಡಲು ಉದ್ದೇಶಪೂರ್ವಕವಾಗಿಯೇ ಖಳನಾಯಕ ಎನಿಸಿಕೊಳ್ಳುತ್ತಾನೆ- ಸ್ಥೂಲಕಾಯತೆ, ತೊದಲುವಿಕೆ, ನಿದ್ರಾ-ನಡಿಗೆ, ಅತಿಯಾಗಿ ತಿನ್ನುವುದು, ಅಥವಾ ಮಾತು ಅಥವಾ ಆಲೋಚನೆಯಲ್ಲಿ ನಿಧಾನತೆಯನ್ನು ಹಾಸ್ಯಕ್ಕಾಗಿ ಬಳಸದಿದ್ದ ಸಂದರ್ಭದಲ್ಲಿ ಈ ರೀತಿಯಾಗಿ ಕಥೆಯನ್ನು ಚಿತ್ರಿಸಲಾಗುತ್ತದೆ. ಅದೇ ರೀತಿಯಾಗಿ, ಮಕ್ಕಳನ್ನು ಶಾಲೆಗೆ ಸೇರಿಸುವುದು ಅವರ ಹೊರಗಿಡುವಿಕೆಯನ್ನು ಕೊನೆಗೊಳಿಸುವುದಿಲ್ಲ, ಬದಲಾಗಿ, ಅವರ ಸಮಸ್ಯೆಗಳು ಅನೇಕ ವಿಧಗಳಲ್ಲಿ ಮುನ್ನೆಲೆಗೆ ಬರುತ್ತಾ ಹೋಗಬಹುದು.

ನಾವು ವಿಕಲಚೇತನ ಮಕ್ಕಳ ಒಳಗೊಳ್ಳುವಿಕೆಯ ಬಗ್ಗೆ ಮಾತನಾಡುವಾಗ ನಾವು ಯಾವಾಗಲೂ ಅವರು ಹೇಗೆ ಭಾವಿಸುತ್ತಾರೆ ಮತ್ತು ಅವರು ಏನನ್ನು ಅನುಭವಿಸುತ್ತಾರೆ ಎಂಬುದನ್ನು ಅವರ ದೃಷ್ಟಿಕೋನದಿಂದ ನೋಡುತ್ತೇವೆ. ಆದರೆ ಅವರು ಮತ್ತು ಉಳಿದವರ ನಡುವಿನ ಈ ಅಂತರವನ್ನು ಪರಿಣಾಮಕಾರಿಯಾಗಿ ಒಂದುಗೂಡಿಸಲು, ವಿಕಲಚೇತನರಲ್ಲದ ಮಕ್ಕಳು ಏನು ನಂಬುತ್ತಾರೆ ಮತ್ತು ಏನನ್ನು ರೂಢಿಯಾಗಿ ಪರಿಗಣಿಸುತ್ತಾರೆ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು.

ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸುವ ಈ ಸಮಯದಲ್ಲಿ ನಮ್ಮಲ್ಲಿ ಅಡಗಿರುವ ಪೂರ್ವಗ್ರಹಗಳನ್ನು ಪರಿಗಣಿಸದಿದ್ದರೆ, ತಾರತಮ್ಯವೆಂದು ನಾವು ಖಚಿತವಾಗಿ ಪರಿಗಣಿಸಿದ ಕ್ರಿಯೆಗಳು ವಾಸ್ತವವಾಗಿ ಕೇವಲ ಭೇದಕಾರಕಗಳಾಗಿರುತ್ತವೆ. ಆದರೆ, 'ನಿಮ್ಮ ತರಗತಿಯಲ್ಲಿ ಆ ಎತ್ತರದ/ಆಕರ್ಷಕ/ಉದ್ದ ಕೂದಲಿನ/ಸುಂದರ ಹುಡುಗಿ ಯಾರು?' ಎಂಬುದು ಅರ್ಹತೆಯಾಗಿ ಕಾಣುವಾಗ, 'ನಿಮ್ಮ ಹುಟ್ಟುಹಬ್ಬಕ್ಕೆ ಆ ಗಿಡ್ಡ/ದಪ್ಪ/ಕಪ್ಪಗಿರುವ ಹುಡುಗನನ್ನು ನೀವು ಆಹ್ವಾನಿಸುತ್ತಿದ್ದೀರಾ?' ಎಂಬುದು ತೀರ ಆಕ್ಷೇಪಾರ್ಹ ಹೇಳಿಕೆಯಾಗುತ್ತದೆ. ನಾವು ಜನರನ್ನು ಗುರುತಿಸುವ ರೀತಿಯೇ ಹೀಗಿರಬಹುದು. ಆದರೆ ದುರದೃಷ್ಟವಶಾತ್, ನಮ್ಮ ಸಮಾಜದಲ್ಲಿ ಜಾತಿ, ವರ್ಗ, ಧರ್ಮವನ್ನು ಒಳಗೊಂಡಂತೆ ಛಿದ್ರಗೊಂಡಿರುವ ನೂರಾರು ವಿಭಾಗಗಳನ್ನು ಸೂಚಿಸುವಲ್ಲಿಯೂ ಇದು ಬಳಕೆಯಾಗುತ್ತದೆ. ನಮ್ಮೊಳಗೆ ಅಡಗಿರುವ ಪೂರ್ವಗ್ರಹಗಳು ನಮ್ಮ ಭಾಷೆ ಮತ್ತು ಅಭಿವ್ಯಕ್ತಿಯಲ್ಲಿ ಬಹಿರಂಗಗೊಳ್ಳುತ್ತವೆ ಮತ್ತು ನಮ್ಮ ಸುತ್ತಮುತ್ತಲಿರುವ ಮಕ್ಕಳಲ್ಲಿರುವ ಸುಪ್ತಪ್ರಜ್ಞೆ ನಾವು ಮೌಖಿಕವಾಗಿ ಮತ್ತು ಸಾಂಕೇತಿಕವಾಗಿ ಕಳುಹಿಸುವ ಸಂಕೇತಗಳನ್ನು ಸ್ವೀಕರಿಸುತ್ತದೆ ಮತ್ತು ಅದನ್ನೇ ಅಳವಡಿಸಿಕೊಳ್ಳುವಂತೆ ಮಾಡುತ್ತದೆ. ಅವರು ನಮ್ಮ ಪೂರ್ವಗ್ರಹಗಳ ಜಾಡು ಹಿಡಿಯುತ್ತಾರೆ ಮತ್ತು ಇತರರನ್ನು ನಮ್ಮ ದೃಷ್ಟಿಕೋನದ ಮೂಲಕ ನೋಡಬಹುದು. ಇವು ಸಮಾಜದ ಮಾದರಿ ಎನ್ನುವ ಕಲ್ಪನೆಗೆ ಅನುಗುಣವಾಗಿಲ್ಲದ ಅಥವಾ ದೇಹ ಮತ್ತು ಮನಸ್ಸಿನ ಪರಿಪೂರ್ಣತೆಯ ಗೀಳು ಹೊಂದಿಲ್ಲದವರನ್ನು ಬೆದರಿಸಲು ಮತ್ತು ಅಪಹಾಸ್ಯ ಮಾಡಲು ಕಾರಣವಾಗುತ್ತವೆ

ಆದ್ದರಿಂದ, ನಾನು ಕೆಲವು  ಮಕ್ಕಳೊಂದಿಗೆ ವಿಕಲಚೇತನ ಮಕ್ಕಳು/ವಯಸ್ಕರ ಬಗ್ಗೆ ಇವರಿಗೆ ಏನು ಭಾವನೆ ಇದೆ ಅವರ ಬಗ್ಗೆ ಇವರು ಏನು ಯೋಚಿಸುತ್ತಾರೆ ಎಂಬುದನ್ನು ಕುರಿತು ಮಾತನಾಡಿದೆ. ನಾನು ಅರಿತ ಮೊದಲ ವಿಷಯವೆಂದರೆ ಈ ಮಕ್ಕಳು ಓದುವ ಸಾರ್ವಜನಿಕ ಶಾಲೆಗಳಲ್ಲಿ ಯಾರೂ ವಿಕಲಚೇತನ ಮಕ್ಕಳಿಲ್ಲ; ಯಾರೂ ಇಲ್ಲ. ಈ ಮಕ್ಕಳಲ್ಲಿ ಯಾರೂ ಅಂಗವೈಕಲ್ಯ ಹೊಂದಿರುವ ಯಾವುದೇ ಮಗುವನ್ನು ಕಂಡಿಲ್ಲ ಮತ್ತು ಅವರು ಬ್ರೈಲ್ ಮತ್ತು ಸಂಕೇತ ಭಾಷೆಯ ಬಗ್ಗೆ ತಿಳಿದಾಗ, ಇವುಗಳನ್ನು ಕಲಿಯುವ ಮೂಲಕ ಇತರರಿಗೆ 'ಸಹಾಯ' ಮಾಡಲು ಸಾಧ್ಯ ಎಂದು ಅವರು ಭಾವಿಸಿದ್ದರು. ವಿಕಲಚೇತನ ಮಕ್ಕಳಿಗೆ ಇರಬೇಕಾದ ಸೌಲಭ್ಯಗಳು ತಮ್ಮ ಶಾಲೆಗಳಲ್ಲಿ ಇಲ್ಲ ಎಂದೇ ಅವರು ಭಾವಿಸಿದ್ದರು. 10 ವರ್ಷ ವಯಸ್ಸಿನ ಒಬ್ಬಳು ಹುಡುಗಿ ತಾನು ಅಂಗವೈಕಲ್ಯ ಹೊಂದಿರುವ ಮಗುವಿನೊಂದಿಗೆ ಭಿನ್ನವಾಗಿರುತ್ತೇನೆ ಎಂದು ಹೇಳಿದಳು, ಆದರೆ ಅವರು ಸ್ನೇಹಿತರಾದ ಅನಂತರ ಈ ವಿಭಿನ್ನತೆ ದೂರವಾಗುತ್ತದೆ. ಕೆಲವು ಮಕ್ಕಳು 'ತಮ್ಮ ಬಗ್ಗೆ ಇತರರು ಕಠಿಣವಾಗಿ ಮಾತನಾಡುತ್ತಾರೆ'  ಎಂದು ಚಿಂತಿತರಾಗಿದ್ದೆವು ಎಂದರು. ವಿಕಲಚೇತನ ಮಕ್ಕಳು ತಾವು ಮಾಡುವ ಅದೇ ಕೆಲಸಗಳನ್ನು ಮಾಡಬಲ್ಲರು  ಬಹುಶಃ ಸ್ವಲ್ಪ ವಿಭಿನ್ನವಾಗಿ ಮಾಡಬಹುದು ಎಂದು ಅವರು ಭಾವಿಸಿದ್ದರೂ, ಅವರು ಮತ್ತೆ ಮತ್ತೆ ಸಹಾಯ ಎಂಬ ಪದವನ್ನು ಬಳಸಿದರು. ಅವರು ಅಂಗವೈಕಲ್ಯವನ್ನು ಹೇಗೆ ಗ್ರಹಿಸುತ್ತಾರೆ ಎಂಬುದರಲ್ಲಿ ಸಹಾನುಭೂತಿ ಇತ್ತೇ ಹೊರತು ಕರುಣೆ ಇರಲಿಲ್ಲ.

ವಿಕಲಚೇತನ ಮಕ್ಕಳು ಅವರಿಗೆಂದೇ ಮೀಸಲಾಗಿರುವ ವಿಶೇಷ ಶಾಲೆಗೇ ಹೋಗಬೇಕೇ ಎಂದು ನಾನು ಮಕ್ಕಳನ್ನು ಕೇಳಿದೆ ಅವರು ವಿಶೇಷ ಶಾಲೆಗೆ ಹೋದರೆ ಅವರು 'ನಮ್ಮಂತೆ ಬಹಳಷ್ಟು ವಿಷಯಗಳನ್ನು ಕಲಿಯಲಾಗುವುದಿಲ್ಲ' ಎಂದು ಥಟ್ಟನೆ ಪ್ರತಿಕ್ರಿಯಿಸಲು ಒಂದು ನಿಮಿಷವನ್ನೂ ತೆಗೆದುಕೊಳ್ಳದೆ 5ನೇ ತರಗತಿಯ ಹುಡುಗಿಯೊಬ್ಬಳು ಉತ್ತರಿಸಿದಳು. ಈ ಮಕ್ಕಳಿಗೆ ಅರಿವಿನ ಕೊರತೆ ಮತ್ತು ವಿಕಲಚೇತನರನ್ನು ಸ್ವೀಕರಿಸಲು ಸಮಸ್ಯೆ ಇಲ್ಲ. ಆದರೆ ಆ ರೀತಿಯ ಯಾವುದೇ ಮಗು ಅಥವಾ ಅಂಗವೈಕಲ್ಯ ಹೊಂದಿರುವ ವ್ಯಕ್ತಿಯನ್ನು ಅವರು ಸಮೀಪದಿಂದ ನೋಡದಿರುವುದು, ಅವರ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳದಿರುವುದು ಮತ್ತು ಈ ಮೊದಲು ಅವರ ಬಗ್ಗೆ ತಿಳಿದಿಲ್ಲದಿರುವುದು ಅವರ ಬಗೆಗಿನ ತಿಳಿವಳಿಕೆಯಲ್ಲಿ ಸ್ವಲ್ಪ ಮಟ್ಟಿಗೆ ಕೊರತೆಗೆ ಕಾರಣವಾಗಿದೆ.

ಇವರ ಬಗ್ಗೆ ಹಿರಿಯರು ಎಂದರೆ -ಶಾಲಾ ಆಡಳಿತ ವರ್ಗ, ಶಿಕ್ಷಕರು, ಉದ್ಯೋಗದಾತರು, ಸರ್ಕಾರಿ ನೌಕರರು ಮತ್ತು ಸಾಮಾನ್ಯ ಜನರು-ಹೆಚ್ಚು ನಿಷ್ಠುರ ಅಭಿಪ್ರಾಯಗಳನ್ನು ಹೊಂದಿದ್ದಾರೆ.  ಇದು, ಸಾರ್ವಜನಿಕ ಸ್ಥಳಗಳು ಮತ್ತು ವ್ಯವಹಾರಗಳಲ್ಲಿ ಅಂಗವಿಕಲರು ಎದುರಿಸುವ ತೊಂದರೆಗಳಿಂದ ಸ್ಪಷ್ಟವಾಗುತ್ತದೆ. ಈ ಅಜ್ಞಾನವು ಆಳವಾಗಿ ಬೇರೂರಿರುವ ತಪ್ಪು ಗ್ರಹಿಕೆಯಿಂದ ಬರುತ್ತದೆ.

ಈಗ ಮೊದಲು ಹೇಳಲಾದ ಶಾಲೆಯಲ್ಲಿ ಇಬ್ಬರು ದೃಷ್ಟಿ ವಿಕಲಚೇತನ ಹುಡುಗರ ಬಗೆಗಿನ ನನ್ನ ಉದಾಹರಣೆಗೆ ಹಿಂತಿರುಗುತ್ತೇನೆ, ಶಾಲೆಯಲ್ಲಿ ಅವರ ಒಳಗೊಳ್ಳುವಿಕೆ ಬಹಳ ಆಸಕ್ತಿದಾಯಕ ರೀತಿಯಲ್ಲಿ ಸಂಭವಿಸಿದೆ. ಈ ದೃಷ್ಟಿ ವಿಕಲಚೇತನ ಮಕ್ಕಳ ಸಹಪಾಠಿಗಳು ಅವರೊಂದಿಗೆ ಚೆಸ್ ಆಟವಾಡಲು ಪ್ರಾರಂಭಿಸಿದಾಗ, ಆ ದೃಷ್ಟಿ ವಿಕಲಚೇತನ ಮಕ್ಕಳಿಬ್ಬರೂ ಚದುರಂಗ/ಚೆಸ್‌ನಲ್ಲಿ ನಿಷ್ಣಾತರು ಎಂಬುದು ಇತರ ಸಾಮಾನ್ಯ  ಮಕ್ಕಳಿಗೆ ಸ್ಪಷ್ಟವಾಯಿತು. ಈ ದೃಷ್ಟಿ ಚೇತನರಿಬ್ಬರೂ  ತಾವು ಊಹಿಸಿದ್ದಕ್ಕಿಂತ ಹೆಚ್ಚಿನದನ್ನು ಮಾಡಬಹುದು ಎಂಬುದು ಇತರ ಮಕ್ಕಳ ಗಮನಕ್ಕೆ ಬಂದಿತು. ಕ್ರಮೇಣ, ಈ ಇಬ್ಬರು (ಬ್ರೈಲ್ ಬಳಸಿ) ಓದಬಲ್ಲರು ಮತ್ತು ಬರೆಯಬಲ್ಲರು ಎಂದು ಅವರು ಕಂಡುಕೊಂಡರು; ಮತ್ತು ಅವರು ಕೇವಲ ಅಧ್ಯಯನದಲ್ಲಿ ಮಾತ್ರ ಮುಂದಿರುವುದು ಮಾತ್ರವಲ್ಲದೆ,  ಉತ್ತಮ ಹಾಸ್ಯ ಪ್ರಜ್ಞೆಯನ್ನೂ ಹೊಂದಿದ್ದಾರೆ ಎಂಬುದು ಅವರ ಅರಿವಿಗೆ ಬಂದಿತು. ಅನಂತರ ಅವರೆಲ್ಲರು ಸ್ನೇಹಿತರಾದರು ಮತ್ತು ಸಹಜವೆಂಬಂತೆ ದೃಷ್ಟಿದೋಷ ಹೊಂದಿದ ಇಬ್ಬರು ಹುಡುಗರು ಶೀಘ್ರದಲ್ಲೇ ಉಳಿದವರೊಂದಿಗೆ ಆಟದ ಮೈದಾನಕ್ಕೆ ತೆರಳಿದ್ದಲ್ಲದೆ, ಶಾಲೆಯ ಇತರ ಎಲ್ಲ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು.

ನಾವು ವಿಕಲಚೇತನರ ಒಳಗೊಳ್ಳುವಿಕೆಯನ್ನು ಕುರಿತು ಚರ್ಚಿಸುವಾಗ, ಅವರಿಗೆ ಏನು ಮಾಡಲು ಸಾಧ್ಯವಿಲ್ಲ ಎಂಬುದರ ಬಗ್ಗೆ ಮಾತನಾಡಬಾರದು, ಆದರೆ ಅವರು ಏನು ಮಾಡಬಹುದು, ಬಹುಶಃ (ಸ್ವಲ್ಪ ಅಥವಾ ಸಂಪೂರ್ಣವಾಗಿ) ವಿಭಿನ್ನವಾಗಿ ಎಂಬುದನ್ನು ಕುರಿತು ಚರ್ಚಿಸಬೇಕು. ಎರಡನೆಯದಾಗಿ, ಇದು ಅತ್ಯಂತ ಸ್ವಾಭಾವಿಕ, ಸಹಜ ರೀತಿಯಲ್ಲಿ ಸಂಭವಿಸಬೇಕು. ಸುಮಾರು ಒಂದು ದಶಕದ ಹಿಂದೆ, ವಿಕಲಾಂಗ ಮಕ್ಕಳು ಉಳಿದ ಮಕ್ಕಳಂತೆ ಎಲ್ಲರಿಗೂ ಇರುವ ಸಾಮಾನ್ಯ ಶಾಲೆಗಳಿಗೆ ಹೋಗಲಿಲ್ಲ ಆದರೆ ವಿಶೇಷ ಶಾಲೆಗಳಿಗೆ ಹೋದರು ಮತ್ತೆ ಕೆಲವರು ಯಾವುದೇ ಶಾಲೆಗಳಿಗೆ ಹೋಗಲಿಲ್ಲ ಎಂಬ ಅಂಶವನ್ನು ಪರಿಗಣಿಸಿ, ಈಗಾಗಲೇ ಅವರ ಮೇಲೆ ಪರಿಣಾಮ ಬೀರಿರುವ ಬದಲಾವಣೆಯನ್ನು ಅದು ಚಿಕ್ಕದಾಗಿದ್ದರೂ ಸ್ವೀಕರಿಸಲು ಹಿಂಜರಿಯಬಾರದು.

ಆರುಷಿ ಒಳಗೊಳ್ಳುವಿಕೆಯನ್ನು ಅದರಲ್ಲೂ ವಿಶೇಷವಾಗಿ ಮಕ್ಕಳಲ್ಲಿ ಅದನ್ನು ಉತ್ತೇಜಿಸಲು ಹಲವಾರು ನವೀನ ಮಾರ್ಗಗಳನ್ನು ಅಳವಡಿಸಿಕೊಂಡಿದೆ. ಅವರು ಶಾಲೆಗಳಲ್ಲಿ ಶಿಕ್ಷಕರಲ್ಲಿ ಸಾಮರ್ಥ್ಯವನ್ನು ರೂಪಿಸುವುದರೊಂದಿಗೆ , ಅವರಿಗೆ ಬ್ರೈಲ್ ಮತ್ತು ಸಂಕೇತ ಭಾಷೆಯ ಜೊತೆಗೆ ಅಂಗವೈಕಲ್ಯದ ಅರಿವು ಮತ್ತು ಸಂವೇದನಾಶೀಲತೆಯ ತರಬೇತಿಯನ್ನು ಕಲಿಸಿದರು. ಇದರಿಂದಾಗಿ ಶಿಕ್ಷಕರು ಅಗತ್ಯ ಸೌಲಭ್ಯಗಳನ್ನು ಒದಗಿಸುವುದರೊಂದಿಗೆ, ವಿಕಲಾಂಗ ಮಕ್ಕಳನ್ನು ತಮ್ಮ ತರಗತಿಗಳಲ್ಲಿ ಸೇರಿಸಿಕೊಳ್ಳಲು ಸಾಧ್ಯವಾಯಿತು. ಈ ಪ್ರಕ್ರಿಯೆಯನ್ನು ಮುಂದುವರಿಸಲು ಸಂಸ್ಥೆಯು ಮಧ್ಯಪ್ರದೇಶ ರಾಜ್ಯ ಪಠ್ಯಪುಸ್ತಕ ನಿಗಮವು ಪ್ರಕಟಿಸಿದ 1 ರಿಂದ 7 ನೇ ತರಗತಿಯವರೆಗಿನ ಎಲ್ಲ ಶಾಲಾ ಪಠ್ಯಪುಸ್ತಕಗಳಲ್ಲಿ ವಿವಿಧ ವಿಕಲಾಂಗತೆಗಳು ಮತ್ತು ವಿಕಲಾಂಗ ವಿದ್ಯಾರ್ಥಿಗಳು ಸಹಜವಾಗಿ ಶಾಲಾ ವ್ಯವಸ್ಥೆಯ ಭಾಗವಾಗಬಹುದಾದ ವಿಧಾನಗಳ ಮಾಹಿತಿಯನ್ನು ಒಳಗೊಂಡಿರುವ ಒಂದು ಪುಟವನ್ನು ನೀಡಿತು.

*ಚಿತ್ರ*

*ಇತರ ಶಾಲೆಗಳ ಮಕ್ಕಳು ಆರುಷಿಯಲ್ಲಿ ಸಂಕೇತ ಭಾಷೆಯನ್ನು ಕಲಿಯುತ್ತಿದ್ದಾರೆ*

ಹಲವಾರು ವರ್ಷಗಳಿಂದ, ಆರುಷಿಯು ತರಗತಿಯ ಹೊರಗೆ ಮತ್ತು ಶಾಲಾ ವ್ಯವಸ್ಥೆಯೊಳಗೆ ವಿಕಲಾಂಗತೆ ಇರುವ ಮತ್ತು ಇಲ್ಲದ ಮಕ್ಕಳು ಇಬ್ಬರನ್ನೂ ಒಂದೆಡೆಗೆ ಸೇರಿಸುವ ಆರೋಗ್ಯಕರ ಒಳಗೊಳ್ಳುವಿಕೆಯನ್ನು ಉತ್ತೇಜಿಸಿದೆ. ಆದ್ದರಿಂದ, ಆರುಷಿಯ ಮಕ್ಕಳು ಸಾಮಾನ್ಯ ಶಾಲೆಯಲ್ಲಿ ಓದುತ್ತಿರುವ ತಮ್ಮ ಸಹವರ್ತಿಗಳನ್ನು ಭೇಟಿ ಮಾಡಲು ಶಾಲೆಗಳಿಗೆ ಭೇಟಿ ನೀಡಿದರೆ, ಸಾಮಾನ್ಯವಾಗಿ ಆರುಷಿಗೆ ಅವರ ವಿವಿಧ ಚಿಕಿತ್ಸೆಗಳು, ಶಾಲಾ-ಸಿದ್ಧತೆಯ ಕಾರ್ಯಕ್ರಮ ಮತ್ತು ಇತರ ಆಕ್ಯುಪೇಶನಲ್ ಥೆರಪಿ (ದೈನಂದಿನ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ತರಬೇತಿ) ಮತ್ತು ಚಲನೆಯ ತರಬೇತಿಯ ಜೊತೆಗೆ ಬ್ರೈಲ್, ಕಂಪ್ಯೂಟರ್‌ಗಳು ಮತ್ತು ಸಂಕೇತ ಭಾಷೆಯ ಬಳಕೆಯನ್ನು ಕಲಿಯಲು ಬರುವ ಮಕ್ಕಳಿಗೆ ಮುಖ್ಯವಾಹಿನಿಯ ಶಾಲೆಯ ಮಕ್ಕಳೊಂದಿಗೆ ಸಂವಹನ ನಡೆಸಲು ಆಹ್ವಾನಿಸಲಾಗುತ್ತದೆ.

ಈ ಕೇಂದ್ರಕ್ಕೆ ಒಂದು ವಿಶೇಷವಾದ ಭೇಟಿಯು ಪ್ರವಾಸದೊಂದಿಗೆ ಪ್ರಾರಂಭವಾಗುತ್ತದೆ. ವಿದ್ಯಾರ್ಥಿಗಳು ತರಗತಿಗಳಿಗೆ ಭೇಟಿ ನೀಡಿ ಸ್ವಲೀನತೆ, ಸೆರೆಬ್ರಲ್ ಪಾಲ್ಸಿ, ದೃಷ್ಟಿ ಹೀನತೆ, ಕಡಮೆ ದೃಷ್ಟಿ ಅಥವಾ ಕಿವುಡುತನ ಹೊಂದಿರುವಂತಹ ವಿಕಲಾಂಗ ಮಕ್ಕಳೊಂದಿಗೆ ಸಂವಹನ ನಡೆಸುತ್ತಾರೆ. ನಗರದ ವಿವಿಧ ಶಾಲೆಗಳಲ್ಲಿ ಅಭ್ಯಸಿಸುತ್ತಿರುವ ಈ ಮಕ್ಕಳು ಆರುಷಿಯಲ್ಲಿ ಮಕ್ಕಳೊಂದಿಗೆ ಬೆರೆಯುತ್ತಾರೆ ಮತ್ತು ಅವರು ಓದುವುದು, ಬರೆಯುವುದು, ಹಾಡುವುದು, ಚಿತ್ರಿಸುವುದು, ಕರಕುಶಲ ಕಲೆಗಳು, ದೈಹಿಕ ವ್ಯಾಯಾಮಗಳನ್ನು ಮಾಡುವುದನ್ನು ವೀಕ್ಷಿಸುತ್ತಾರೆ ಮತ್ತು ಆನಂದಿಸುತ್ತಾರೆ. ಕೊನೆಯದು ಮುಖ್ಯವಾಗಿದೆ ಏಕೆಂದರೆ ಸಾಮಾನ್ಯ ಮಕ್ಕಳು ವಿಕಲಾಂಗರು ಕಷ್ಟ, ದುಃಖ ಮತ್ತು ಅತೃಪ್ತ ಜೀವನವನ್ನು ನಡೆಸುತ್ತಾರೆ ಎಂದು ಭಾವಿಸುತ್ತಾರೆ. ಆದರೆ ವಿಶೇಷ ಚೇತನರು ನಗುವುದು ಮತ್ತು ಹಾಸ್ಯಮಯ ವಿಶೇಷಗಳನ್ನು ಹಂಚಿಕೊಳ್ಳುವುದನ್ನು ನೋಡಿದಾಗ, ಸಾಮಾನ್ಯ ಮಕ್ಕಳು ನಿಜವಾಗಿಯೂ ಆಶ್ಚರ್ಯಪಡುತ್ತಾರೆ. ವಿಕಲಚೇತನರು ತಮ್ಮ ಕೆಲಸಗಳನ್ನು ತಾವೇ ಸ್ವತಂತ್ರವಾಗಿ ಮಾಡಿಕೊಂಡು

ಹೋಗುವುದನ್ನು ಸಹ ಅವರು ನೋಡುತ್ತಾರೆ. ಎಲ್ಲ ಮಕ್ಕಳು ಒಟ್ಟಿಗೆ ಆಟಗಳನ್ನು ಆಡುತ್ತಾರೆ ಮತ್ತು ಹಾಡುಗಳನ್ನು ಹಾಡುತ್ತಾರೆ. ಅವರು ಎಲ್ಲರೊಂದಾಗಿ ಬೆರೆತು ಗುಂಪುಗಳ ನಡುವೆ ರಸಪ್ರಶ್ನೆಗಳಲ್ಲಿ ಸ್ಪರ್ಧಿಸುತ್ತಾರೆ.

*ಚಿತ್ರ*

*ಭೇಟಿ ನೀಡುವ ವಿದ್ಯಾರ್ಥಿಗಳು ತಮ್ಮ ಕೈಗಳಲ್ಲಿ ಬ್ರೈಲ್ ಲಿಪಿಯನ್ನು ಪ್ರಯತ್ನಿಸುತ್ತಿದ್ದಾರೆ*

ವಿಕಲಚೇತನ ಮಕ್ಕಳು ಕಲಿಯಲು ಮತ್ತು ಸಂವಹನ ನಡೆಸಲು ಬ್ರೈಲ್ ಮತ್ತು ಸಂಕೇತ ಭಾಷೆಯನ್ನು ಹೇಗೆ ಬಳಸುತ್ತಾರೆ ಎಂಬುದನ್ನು ಭೇಟಿ ನೀಡುವ ಮಕ್ಕಳು ವೀಕ್ಷಿಸುತ್ತಾರೆ. ಅವರು ಆಡಿಯೊಬುಕ್‌ಗಳನ್ನು ಕೇಳುತ್ತಾರೆ ಮತ್ತು ಬ್ರೈಲ್ ಆವೃತ್ತಿಯ ಹ್ಯಾರಿ ಪಾಟರ್ ಅನ್ನು ಓದುತ್ತಾರೆ! ಸಾಮಾನ್ಯ ಮಕ್ಕಳಿಗೂ ಕೆಲವು ಪ್ರಾಥಮಿಕ ಹಂತದ ಬ್ರೈಲ್ ಮತ್ತು ಸಂಕೇತ ಭಾಷೆಯನ್ನೂ ಪರಿಚಯಿಸಲಾಗಿದೆ. ಚಿಕ್ಕ ಮಕ್ಕಳು, ಪ್ರಾಥಮಿಕ ತರಗತಿಯಲ್ಲಿರುವವರು, ಆರಂಭಿಕ ಅಂಶಗಳನ್ನು ಕಲಿಯಲು ಅಪಾರ ಆಸಕ್ತಿಯನ್ನು ತೋರಿಸುತ್ತಾರೆ ಮತ್ತು ಇವುಗಳನ್ನು ತ್ವರಿತವಾಗಿ ಕಲಿಯಲು ಅವರಿಗೆ ಸಾಧ್ಯವಾಗುತ್ತದೆ. ಈ ಮಕ್ಕಳು ಆರುಷಿಯಲ್ಲಿ ಕೆಲವು ಗಂಟೆಗಳ ಕಾಲ ಕಳೆದ ಅನಂತರ ಅವರನ್ನು ಆರುಷಿಯಲ್ಲಿರುವ ಮಕ್ಕಳು ನಿಮಗಿಂತ ಭಿನ್ನರಾಗಿದ್ದಾರೆಯೇ ಎಂದು ಕೇಳಿದಾಗ, ಅವರು ಹೌದು, ನಾವು ನೋಟ್‌ಬುಕ್ ಮತ್ತು ಪೆನ್ಸಿಲ್‌ಗಳನ್ನು ತೆಗೆದುಕೊಂಡು ಹೋಗುವಾಗ, ದೃಷ್ಟಿ ವಿಕಲಚೇತನ ಮಗು ಬ್ರೈಲ್ ಸ್ಲೇಟ್ ಮತ್ತು ಸ್ಟೈಲಸ್ ಅನ್ನು ಶಾಲೆಗೆ ಒಯ್ಯುತ್ತದೆ, ಅದು ಒಂದೇ ನಮ್ಮ ಅರಿವಿಗೆ ಬಂದದ್ದು ಎಂದರು.

ಒಬ್ಬ ದೃಷ್ಟಿ ವಿಕಲಚೇತನ ವಿದ್ಯಾರ್ಥಿಯು ಬ್ರೈಲ್ ಕಥಾ ಪುಸ್ತಕದಿಂದ ಕಥೆಯನ್ನು ಓದುವುದನ್ನು ಕೇಳಿ ಆಶ್ಚರ್ಯಗೊಂಡ ಸಾಮಾನ್ಯ ಶಾಲಾ ಬಾಲಕಿಯು ಹೀಗೆ ಹೇಳಿದಳು, 'ನಾನು ತುಂಬಾ ವಿಸ್ಮಯಗೊಂಡೆ. ಏನನ್ನು ನೋಡಲು ಸಾಧ್ಯವಿಲ್ಲದ ಈ ಮಕ್ಕಳು ತುಂಬ ಹರ್ಷಚಿತ್ತದಿಂದ ಮತ್ತು ಸಂತೋಷದಿಂದ ಇರುತ್ತಾರೆ. ದೃಷ್ಟಿ ಇರುವ ನಾವು, ಟಿವಿ ಕಾರ್ಯನಿರ್ವಹಿಸುತ್ತಿಲ್ಲ ಎಂಬ ಸಣ್ಣ ವಿಷಯಗಳ ಬಗ್ಗೆ ದೂರು ನೀಡುತ್ತೇವೆ.

*ಚಿತ್ರ*

*ಬ್ರೈಲ್ ಲಿಪಿಯಲ್ಲಿರುವ ಕಥೆ ಹೇಳುವ ಅವಧಿ ಪ್ರಗತಿಯಲ್ಲಿದೆ*

ಆರುಷಿಯ ಮಕ್ಕಳು ಯಾವುದೇ ವಿನಾಯಿತಿಯಿಲ್ಲದೆ, ಮುಖ್ಯವಾಹಿನಿಯ ಶಾಲೆಗಳಿಗೆ ಸಿದ್ಧರಾಗಿರುವುದರಿಂದ ಮತ್ತು ಪ್ರವೇಶ ಪಡೆದಿರುವುದರಿಂದ, ಅವರು ಅಲ್ಲಿ ಪಡೆಯುವ ವಾತಾವರಣವು ಅವರನ್ನು ಸ್ವಾಗತಿಸುವುದು ಮತ್ತು ಸ್ವೀಕರಿಸುವುದಾಗಿದ್ದು, ಅವರನ್ನು ಪ್ರತ್ಯೇಕ ಮಾಡದಿರುವುದು ಕಡ್ಡಾಯವಾಗಿದೆ. ಅವರ ಸಹಪಾಠಿಗಳು ಇವರೂ ತಮ್ಮಂತೆಯೇ ಓದಬಹುದು, ಬರೆಯಬಹುದು ಮತ್ತು ಸಂವಹನ ಮಾಡಬಹುದು ಎಂದು ಪ್ರಶಂಸಿಸಿದರೆ, ವಿಭಿನ್ನ ವಿಧಾನಗಳ ಹೊರತಾಗಿಯೂ ಸಹ, ವಿಕಲಚೇತನ ಮಕ್ಕಳು ಒಳಗೊಳ್ಳುವಿಕೆಯ ಉತ್ತಮ ಅವಕಾಶವನ್ನು ಪಡೆಯುತ್ತಾರೆ.